ಕೂ. ಸ. ಅಪರ್ಣ

# ಗೋಣಿತುಮಕೂರು ಮತ್ತು ಕಲ್ಲೇಶ್ವರ ದೇವಾಲಯ

ಗೋಣಿತುಮಕೂರು, ತುಮಕೂರು ಜಿಲ್ಲೆಯ ತುರುವೇಕೆರೆ ತಾಲ್ಲೂಕಿಗೆ ಸೇರಿದ ಒಂದು ಗ್ರಾಮ. ಇದು ತುರುವೇಕೆರೆ–ದಬ್ಬೆಘಟ್ಟ ಮಾರ್ಗದಲ್ಲಿದ್ದು, ತುರುವೇಕೆರೆಯಿಂದ ಮೂರು ಮೈಲಿ ದೂರದಲ್ಲಿದೆ. ಸುಮಾರು ೮೦೦–೯೦೦ ವರ್ಷಗಳ ಇತಿಹಾಸವಿರುವ ಈ ಹಳ್ಳಿಯಲ್ಲಿ ಮೂರು ಶಾಸನಗಳು ದೊರೆತಿವೆ. ಇವುಗಳಲ್ಲಿ ಒಂದು ಲಿಂಗಮುದ್ರೆಯ ಕಲ್ಲಾಗಿದ್ದರೆ,[1] ಮತ್ತೊಂದು '....ಕೆಱೆ ಬಂಡಿಯ....' ಎಂಬ ಉಲ್ಲೇಖವಿರುವ ತ್ರುಟಿತ ಶಾಸನವಾಗಿದೆ. ಈ ಊರಿನಲ್ಲಿರುವ ಕೆರೆಯ ಬಗ್ಗೆ ಇದು ಹೇಳುತ್ತಿರಬಹುದು. ವಿಜಯನಗರ ಕಾಲದ ಮತ್ತೊಂದು ಶಾಸನವೂ ಇದ್ದು, ಅದು ಅಲ್ಲಲ್ಲಿ ಹಾಳಾಗಿದ್ದರೂ ಪೂರ್ಣಪಾಠವನ್ನೊಳಗೊಂಡಿದೆ. ಇಷ್ಟೇ ಅಲ್ಲದೆ, ಅಲ್ಲಲ್ಲಿ ಬಿಡಿ ವೀರಗಲ್ಲುಗಳೂ ಮಾಸ್ತಿಕಲ್ಲುಗಳೂ ದೊರೆತಿದ್ದು, ಅವು ಊರಿನ ಹಿರಿಮೆಯನ್ನು ಸಾರುತ್ತಿವೆ. 'ಮಾಸ್ತಮ್ಮ ದೇವರು' ಎಂದು ಹೇಳುವ ಒಂದು ಸಣ್ಣ ಗುಡಿಯು ಅಲ್ಲಿದ್ದು, ಅದರ ಹಿನ್ನೆಲೆಯಲ್ಲಿ ಐತಿಹ್ಯವೊಂದಿದೆ.[2]

---

1 ಈ ಲಿಂಗಮುದ್ರೆಯ ಕಲ್ಲಿಗೇ ಒಂದು ಗುಡಿಯನ್ನು ಕಟ್ಟಲಾಗಿದೆ.

2 ಅಲ್ಲಿನ ಜನರು ಈ ರೀತಿಯಾಗಿ ಹೇಳುತ್ತಾರೆ: ಗೋಣಿಗರು ಹೆಚ್ಚಾಗಿ ವಾಸವಾಗಿದ್ದ ಈ ಊರಿಗೆ ಕೃಷ್ಣದೇವರಾಯನ ಕಾಲದಲ್ಲಿ ಅಲೆಮಾರಿಗಳಾಗಿ ಬಂದು ಒಕ್ಕಲಿಗರು ಸೇರಿಕೊಂಡರು.ಅವರದು ಒಂದೇ ಮನೆ ಇದ್ದರೂ ಆ ಮನೆಯಲ್ಲಿ ಹದಿನೇಳು ಜನರಿದ್ದುದರಿಂದ ಗೋಣಿಗರಿಗಿಂತಲೂ ಇವರೇ ಬಲಿಷ್ಠರಾಗಿದ್ದರು. ಇವರ ಮನೆಯ ಒಂದು ಸುಂದರವಾದ ಹೆಣ್ಣು ಮಗಳನ್ನು, ಪಕ್ಕದ ಗ್ರಾಮವಾದ ನಡುವನಹಳ್ಳಿಯ ಗೊಲ್ಲರು, ಮದುವೆ ಮಾಡಿಕೊಡುವಂತೆ ಕೇಳಲು,ಇವರು ತಮ್ಮ ಜಾತಿಯಿಂದ ಗೊಲ್ಲರ ಜಾತಿಗೆ ಹೆಣ್ಣು ಕೊಡುವುದಿಲ್ಲವೆಂದು ಹೇಳಿದಾಗ ರೊಚ್ಚಿಗೆದ್ದ ಗೊಲ್ಲರು ಇವರ ಮೇಲೆ ದಾಳಿ ನಡೆಸಿ, ಈ ಹದಿನಾರು ಜನರನ್ನೂ ಕೊಲೆ ಮಾಡಿದರು. (ಶತ್ರುಗಳಾಗಿದ್ದ ಗೋಣಿಗರು ಇವರ ಸಹಾಯಕ್ಕೆ ಬರಲಿಲ್ಲ). ಉಳಿದ ಒಬ್ಬಳೇ ಹೆಣ್ಣುಮಗಳು 'ತನ್ನ ರಕ್ಷಣೆ'ಗಾಗಿ ಬೆಂಕಿಗೆ ಹಾರಿಕೊಂಡು'ಹುತಾತ್ಮ'ಳಾದಳು. ಇವಳೊಂದಿಗೆ ಇವಳ ಗೆಳತಿಯಾಗಿದ್ದ ಮಡಿವಾಳರ ಹೆಣ್ಣುಮಗಳು ಕೂಡಾ ಅಗ್ನಿಗೆ ಆಹುತಿಯಾದಳು. ಹೀಗೆ ಅಲ್ಲಿಯ ಮಹಾಸತಿ ಮೈದಳೆದು ಪೂಜನೀಯಳಾದಳು.

ಇದೇ ಮನೆತನದಲ್ಲಿ ಮಹಾಪರಾಕ್ರಮಶಾಲಿಯಾದ ಗಂಡು ಮಗುವೊಂದು ಜನಿಸಲು ಅವನಿಗೆ ಬ್ರಹ್ಮಲಿಂಗೇಶ್ವರನ ಅಂಕಿತದಲ್ಲಿ ಬಮ್ಮೆಗೌಡ ಎಂದು ಹೆಸರಿಟ್ಟರು. ಗೋಣಿತುಮಕೂರಿನ ಮೂಲಪುರುಷನಾಗಿ ಆತನು ಉಳಿಯಲೆಂದು, ಇದೇ ಊರಿನಲ್ಲಿದ್ದು ಬಲಿಷ್ಠವಾದ ಮನೆತನವಾಗಲೆಂದು, ಇವನ ಸೋದರಮಾವಂದಿರು, ಊರಿನ ಸುತ್ತ ನಾಲ್ಕು ಮನೆತನಗಳನ್ನು ಇವನ ಸಹಾಯಕ್ಕೆಂದು ನೆಲೆ ನಿಲ್ಲಿಸಿದರಲ್ಲದೆ, ಕುಡಿಯುವ ನೀರಿನ ಕಲ್ಯಾಣಿ ಇತ್ಯಾದಿ ಅನುಕೂಲಗಳನ್ನು ಮಾಡಿಕೊಟ್ಟರು. ನಾಲ್ಕು ಮಂದಿಯನ್ನು ಈ ಊರಿನ ನಾಲ್ಕು ಪಾಲಿನ ಗೌಡರೆಂದು ನೇಮಿಸಿದರು. ಇವರೆಲ್ಲರೂ ವಂಶಪಾರಂಪರ್ಯವಾಗಿ ಗೌಡಿಕೆಯನ್ನು ನಡೆಸಿಕೊಂಡು, ಊರಿನ ಹಬ್ಬ ಹರಿದಿನಗಳನ್ನು ವಿಜೃಂಭಣೆಯಿಂದ ನಡೆಸಿಕೊಂಡು ಬರುತ್ತಿದ್ದಾರೆ.

ಸುಮಾರು ೮೦೦-೯೦೦ ವರ್ಷಗಳ ಹಿಂದೆ ಹೀಗೆ ರೂಪುಗೊಂಡ ಗೋಣಿತುಮಕೂರಿನ ಆದಿವಾಸಿಗಳು ಗೋಣಿಗರೆಂದೂ ಅವರಿಂದ ಈ ಊರಿಗೆ 'ಗೋಣಿತುಮಕೂರು' ಎಂಬ ಹೆಸರು ಬಂದಿತೆಂದೂ ತಿಳಿದುಬರುತ್ತದೆ.

ಈ ಊರಿನಲ್ಲಿ ಆಂಜನೇಯ, ಭೈರವೇಶ್ವರ, ಗದ್ದೆ ಕೆಂಪಮ್ಮ, ಅರಸಮ್ಮ, ರಾಮಲಿಂಗೇಶ್ವರ, ಬ್ರಹ್ಮಲಿಂಗೇಶ್ವರ, ಕಲ್ಲೇಶ್ವರ, ವಿಘ್ನೇಶ್ವರ, ಮುಂತಾದ ದೇವಾಲಯಗಳಿದ್ದು, ಗ್ರಾಮದ ಮುಖ್ಯಸ್ಥರು ಹೇಳಿದಂತೆ ಹಬ್ಬಗಳನ್ನು, ಪೂಜೆ–ಪುನಸ್ಕಾರಗಳನ್ನು ನಡೆಸಿಕೊಂಡು ಬರುತ್ತಾರೆ. ಈ ದೇವಾಲಯಗಳು ಸುಮಾರು ೩೦೦–೪೦೦ ವರ್ಷಗಳ ಹಿಂದಿನವೆಂದು ತೋರುತ್ತವೆ.

ಬ್ರಹ್ಮಲಿಂಗೇಶ್ವರ ದೇವಾಲಯ : ಈ ಬ್ರಹ್ಮಲಿಂಗೇಶ್ವರನೇ ಗ್ರಾಮದ ಮೂಲದೇವರು. ಹಿಂದೆ ಗೊಂಡಾರಣ್ಯವಾಗಿದ್ದ ಈ ಊರಿನಲ್ಲಿ ತಪಸ್ಸು ಮಾಡಿ ತ್ರಿಮೂರ್ತಿಗಳ ದರ್ಶನ ಪಡೆದು, ಕಾಯವಳಿದ ಋಷಿಯೊಬ್ಬನ ಕಥೆಯನ್ನು ಈ ದೇವಾಲಯದ ಹಿನ್ನೆಲೆಯಲ್ಲಿ ಹೇಳುತ್ತಾರೆ. ಅಂತೆಯೇ, ಇವನ ಸೇವೆ ಮಾಡಿ ಕಾಯ ಕಳೆದ 'ಅರಸಮ್ಮ'ನೇ ಈ ಊರಿನ ಗ್ರಾಮದೇವತೆ. ಈ ಋಷಿಯ ಇಚ್ಛೆಯಂತೆ ಈ ಎರಡೂ ದೇವಾಲಯಗಳನ್ನು (ಬ್ರಹ್ಮಲಿಂಗೇಶ್ವರ ಮತ್ತು ಅರಸಮ್ಮನ ದೇವಾಲಯಗಳು) ಕಟ್ಟಲಾಗಿದ್ದು, ಇಂದಿಗೂ ಇಲ್ಲಿ ವಂಶಪಾರಂಪರ್ಯವಾಗಿ ಪೂಜೆಗಳು ನಡೆಯುತ್ತಿವೆ ; ಇದಕ್ಕೆ ಗ್ರಾಮದವರ ದತ್ತಿಯೂ ಇದೆಯೆಂದು ಹೇಳುತ್ತಾರೆ. ಬ್ರಹ್ಮಲಿಂಗೇಶ್ವರ ದೇವಾಲಯದಲ್ಲಿ ವರ್ಷಕ್ಕೊಮ್ಮೆ ಅಗ್ನಿಕುಂಡ, ವೀರಗಾಸೆ ಕುಣಿತ, ದೇವರ ಪ್ರತಿಮೆ ಹೊತ್ತು ಕುಣಿಯುವುದು, ಡೋಲು–ವಾದ್ಯಗಳ ಸಮೇತ ನರ್ತನ, ಇತ್ಯಾದಿಗಳು ತಪ್ಪದೆ ನಡೆಯುತ್ತವೆ.

ಅರಸಮ್ಮದೇವಿ : ಗ್ರಾಮದೇವತೆಯಾದ 'ಆದಿಶಕ್ತಿ ಅರಸಮ್ಮದೇವಿ'ಯು ಇಂದಿಗೂ 'ದುಷ್ಟಶಿಕ್ಷಣ ಶಿಷ್ಟರಕ್ಷಣ' ದೇವಿಯಾಗಿ ಜನಪದರ ನಂಬಿಕೆಗೆ, ಅವರ ಭಕ್ತಿಪೂರ್ವಕ ಪೂಜಾದಿಗಳಿಗೆ ಪಾತ್ರಳಾಗಿದ್ದಾಳೆ. ಸುಮಾರು ೨೫೦ ವರ್ಷಗಳ ಹಿಂದೆ ಪೂಜೆ ಮಾಡುತ್ತಿರುವಾಗ ತಾಯಿಯ ಶಿಲ್ಪದಿಂದ ಹಾಲು ಧಾರಾಕಾರವಾಗಿ ಹರಿಯಲು, ಗ್ರಾಮದ ಜನರು ಅದನ್ನು 'ಮಹಾರಾಜ'ರಿಗೆ ಕಳುಹಿಸಿದರಂತೆ. ಮಹಾರಾಜರು ಆ ಹಾಲನ್ನು ಪರೀಕ್ಷಿಸಿ, ಇದು ದೈವದತ್ತವಾಗಿ ಬಂದ ಕ್ಷೀರವೆಂದು ಭಾವಿಸಿ ಈ ದೇವತೆಗೆ ಹೆಚ್ಚಿನ ಕೊಡುಗೆ ಕೊಡಬೇಕೆಂದು ಆದೇಶಿಸಿದರಂತೆ. ಅಲ್ಲದೆ, ಮಹಾರಾಜರು ಇವಳನ್ನು 'ಅಮೃತ ಮಹಾಲಕ್ಷ್ಮಿ' ಎಂದು ಗೌರವಿಸಿ ಪೂಜಿಸಿದರಂತೆ. ಈ ದೇವಿಯ ಹೆಸರಿನಲ್ಲಿ ವರ್ಷಕ್ಕೊಮ್ಮೆ ಯುಗಾದಿಯ ನಂತರ ಜಾತ್ರೆ ನಡೆಯುತ್ತದೆ. ಒಕ್ಕಲು ಗೌಡರು ಇದರ ಪೂಜೆಯನ್ನು ಮಾಡುತ್ತಾರೆ.

ಕಲ್ಲೇಶ್ವರ ದೇವಾಲಯ : ಈ ಊರಿನಲ್ಲಿ ಪ್ರಾಚೀನವಾದ, ವಾಸ್ತುಶಿಲ್ಪದ ದೃಷ್ಟಿಯಿಂದ ಮುಖ್ಯವಾದ ದೇವಾಲಯವಿದು. ಇದು ಈ ಊರಿನ ಬಸ್ ನಿಲ್ದಾಣ ಮತ್ತು ಕೆರೆಗೆ ಹತ್ತಿರದಲ್ಲಿದೆ. ಶಾಸ್ತ್ರಕ್ಕೆ ಸರಿಯಾಗಿ ಪೂರ್ವದಿಕ್ಕಿಗೆ ಮುಖಮಾಡಿರುವ[3] ಈ ದೇವಾಲಯವನ್ನು ಪೂರ್ಣವಾಗಿ ಕಲ್ಲಿನಿಂದ ಕಟ್ಟಲಾಗಿದ್ದು, ಸರಳ ರಚನೆಯನ್ನು ಹೊಂದಿದೆ. ಹೆಚ್ಚು ಎತ್ತರವಾಗಿರದ ಈ ದೇವಾಲಯದಲ್ಲಿ ಗರ್ಭಗೃಹ, ಅಂತರಾಳ, ನವರಂಗಗಳಿದ್ದು, ಪ್ರವೇಶದಲ್ಲಿ ಮೆಟ್ಟಿಲುಗಳಿವೆ. ಹೊರಭಾಗದಲ್ಲಿ ಅಧಿಷ್ಠಾನ, ಭಿತ್ತಿ, ಪ್ರಸ್ತರ, ಶಿಖರ, ಗ್ರೀವ, ಕಲಶ ಈ ಎಲ್ಲ ಭಾಗಗಳೂ ಬಹುಪಾಲು ಮೊದಲಿನಂತೆಯೇ ಉಳಿದಿವೆ. ದೇವಾಲಯವು ಇಂದಿಗೂ ಸುಸ್ಥಿತಿಯಲ್ಲಿದೆ. ಅಲ್ಲದೆ, ಅಧಿಷ್ಠಾನವು ಖುರ–ಕುಂಭ–ಪಟ್ಟಿಕಾಗಳಿರುವ ಸರಳವಾದ 'ಮಂಚಬಂಧ' ಅಧಿಷ್ಠಾನವಾಗಿದ್ದು, ಅಲಂಕಾರರಹಿತವಾಗಿದೆ. ಅಧಿಷ್ಠಾನದ ಯಾವುದೇ ಭಾಗದಲ್ಲಾದರೂ 'ಪ್ರಣಾಳ'ವು ಬರಬಹುದಾಗಿದ್ದು, ಆ ಭಾಗವು ಗರ್ಭಗೃಹದ ನೆಲಮಟ್ಟವನ್ನು ಸೂಚಿಸುತ್ತದೆ ಮತ್ತು ಪ್ರಣಾಳವು ದೇವಾಲಯದ ಎಡಭಾಗದಲ್ಲಿರಬೇಕೆಂಬುದು ನಿಯಮ.[4] ಅಂತೆಯೇ, ಇಲ್ಲಿಯೂ ದೇವಾಲಯದ ಎಡಭಾಗಕ್ಕೆ, ಅಧಿಷ್ಠಾನದ 'ಕಂಠ'ಭಾಗದಲ್ಲಿ ಸಾಧಾರಣ ರೀತಿಯ ಪ್ರಣಾಳವನ್ನು ರಚಿಸಲಾಗಿದೆ. ಅಧಿಷ್ಠಾನದ ಮೇಲಿನ ಭಿತ್ತಿಯನ್ನೂ ಸರಳವಾಗಿ ರಚಿಸಲಾಗಿದೆ. ಭದ್ರ–ಕರ್ಣಗಳ ವಿಂಗಡಣೆಯಿಲ್ಲದೆ ನೇರ ರಚನೆಯನ್ನು ಹೊಂದಿದ್ದರೂ ಗರ್ಭಗೃಹ ಮತ್ತು ಅಂತರಾಳವನ್ನೊಳಗೊಂಡ ಭಾಗ ಮಾತ್ರ ಹಿಂದೆ ಸರಿದಂತಿದ್ದು ನವರಂಗದ ವೈಶಾಲ್ಯತೆಯನ್ನು ಗುರುತಿಸಬಹುದಾಗಿದೆ. ಭಿತ್ತಿಗೆ 'ವೇದಿ' ಇಲ್ಲದಿರುವುದರಿಂದ, ನೇರವಾಗಿ ಅಧಿ

3 ಮಯಮತ, ೬.೪೪-೪೫

4 ಅದೇ, ೧೯.೨೩-೨೮

ಷ್ಠಾನದ ಮೇಲಿನಿಂದಲೇ ಭಿತ್ತಿಯಲ್ಲಿ ನಿಶ್ಚಿತ ಅಂತರದಲ್ಲಿ 'ಕುಡ್ಯಸ್ತಂಭ'ಗಳನ್ನು ಬಿಡಿಸಲಾಗಿದೆ. ಈ ಕುಡ್ಯಸ್ತಂಭಗಳು 'ಬ್ರಹ್ಮಕಾಂತ' ರೀತಿಯವು. ಅದರ ಬೋದಿಗೆಯ ಮೇಲೆ ಪುಷ್ಪವನ್ನೂ 'ಕಲಶ'ದ ಮೇಲೆ 'ಪತ್ರಚಿತ್ರ'ವನ್ನೂ ಬಿಡಿಸಲಾಗಿದೆ. ಭಿತ್ತಿಯಲ್ಲಿ ಇನ್ನಾವುದೇ ಅಲಂಕಾರವಿಲ್ಲ.

ಈ ದೇವಾಲಯದಲ್ಲಿ ಪ್ರಸ್ತರದ—ಉತ್ತರ, ವಾಜನ, ವಲಭೀ, ಕಪೋತ-ಈ ಎಲ್ಲ ಭಾಗಗಳನ್ನೂ ಗುರುತಿಸಬಹುದಾಗಿದೆ. 'ವಲಭೀ'ಯು ನಿರಲಂಕೃತವಾಗಿದ್ದು, ಕಪೋತದ ಮೇಲೆ 'ನಾಸಿ'ಗಳನ್ನೂ ಬಿಡಿಸಲಾಗಿದೆ. ದೇವಾಲಯದ ಎಡಭಾಗದಲ್ಲಿ ನವರಂಗಕ್ಕೆ ಸೇರಿದ ಎಡೆಯಲ್ಲಿ ಮಾತ್ರ ಮೊದಲಿನ ಪ್ರಸ್ತರವು ಹಾಳಾಗಿರುವುದರಿಂದ, ಈಗ ಸಿಮೆಂಟ್ ಗಾರೆಗಳಿಂದ ಕೈಪಿಡಿಗೋಡೆಯನ್ನು ರಚಿಸಿ ಆ ಭಾಗವನ್ನು ಮುಚ್ಚಿದ್ದಾರೆ. ಪ್ರಸ್ತರದ ಮೇಲೆ ಶಿವನ ವಾಹನವಾದ ನಂದಿಯನ್ನೂ ಮೂಲೆಗಳಲ್ಲಿ ಸಿಂಹವನ್ನೂ ಇಡಲಾಗಿದೆ.[5] ಇದರ ಮೇಲೆ ಕಟ್ಟಲಾಗಿರುವ ಶಿಖರವು 'ಕದಂಬನಾಗರ' ರೀತಿಯದಾಗಿದೆ.[6] ಹಂತಹಂತವಾಗಿ ಕಿರಿದಾಗುತ್ತಾ ಹೋಗುವ ನಾಲ್ಕು ತಳಗಳನ್ನು ಹೊಂದಿರುವ ಈ ಶಿಖರವು ಕಪೋತ-ಕಂಠಗಳಿಂದ ಕೂಡಿದೆ ಹಾಗೂ ಕಪೋತದಲ್ಲಿ ಸಾಲು ನಾಸಿಗಳಿವೆ. ಅಂತ್ಯದಲ್ಲಿ ನಾಲ್ಕು ಮುಖದ 'ಬ್ರಹ್ಮಛಂದ ಶಿಖರ'ವಿದೆ. ಶಿಖರದ ನಾಲ್ಕೂ ದಿಕ್ಕುಗಳಲ್ಲಿ ಮಹಾನಾಸಿಯನ್ನು ಕೆತ್ತಲಾಗಿದ್ದು (ಈಗ ಸವೆದುಹೋಗಿದೆ), ಇದರ ಮೇಲೆ ಮಹಾಪದ್ಮ ಮತ್ತು ಸ್ತೂಪಿ ಇವೆ. ಶಿಖರದ ಮುಂಭಾಗದಲ್ಲಿ ಶುಕನಾಸಿಯ ರಚನೆಯು ನಾಲ್ಕು ತಳಗಳನ್ನೂ ಆವರಿಸಿದೆ.

ಗರ್ಭಗೃಹವು ಅವಶ್ಯಕತೆಗೆ ತಕ್ಕಂತೆ ಚಚ್ಚೌಕವಾಗಿಯೂ ಚಿಕ್ಕದಾಗಿಯೂ ಇದ್ದು, ಅದರಲ್ಲಿ ಸಣ್ಣದಾದ ಲಿಂಗವಿದೆ. ಅಲ್ಲಲ್ಲಿ ಭಿತ್ತಿಸ್ತಂಭಗಳಿವೆ. 'ವಿತಾನ'ದಲ್ಲಿ ಪುಷ್ಪವನ್ನು ಬಿಡಿಸಲಾಗಿದೆ. ದ್ವಾರದಲ್ಲಿ ನಿರಲಂಕೃತ ಶಾಖೆಗಳಿದ್ದು ಅದರ ಕೆಳಗೆ 'ಪೇದ್ಯಾಪಿಂಡ'ವನ್ನು ರಚಿಸಿದ್ದಾರೆ. 'ಮಂಗಳಫಲಕ'ದ ಮೇಲೆ ಯಾವುದೇ ಬಿಂಬವಿಲ್ಲ. ಆದರೆ ಅದರ ಪಕ್ಕಗಳಲ್ಲಿ ಕೆಳಗೆ ತೂಗಾಡುತ್ತಿರುವ ಕಮಲದ ಮೊಗ್ಗನ್ನು ಬಿಡಿಸಲಾಗಿದೆ. ಅಂತರಾಳವೂ ಗರ್ಭಗೃಹದಷ್ಟೇ ವಿಸ್ತಾರವಾಗಿದೆ. ಇದು 'ತೆರೆದ ಅಂತರಾಳ'ವಾಗಿದ್ದು, ವಿತಾನದಲ್ಲಿ ಕಮಲದ ಮೊಗ್ಗನ್ನು ಬಿಡಿಸಿದ್ದಾರೆ.

ಅಂತರಾಳದ ಮುಂದಿನ ನವರಂಗವು ಹೆಚ್ಚು ವಿಶಾಲವಾಗಿಲ್ಲವಾದರೂ ಸುಂದರ ಕಂಬ ಮತ್ತು ವಿತಾನಾಲಂಕರಣಗಳನ್ನು ಹೊಂದಿದೆ. ನವರಂಗದಲ್ಲಿ ವೇದಿಕೆಯನ್ನೂ ಕಂಬಗಳ ಮಧ್ಯೆ 'ವಿತಾನ'ವನ್ನೂ ರಚಿಸಬೇಕೆಂದು 'ಮಯಮತ'ದಲ್ಲಿ ಹೇಳಿದೆ.[7] ಅಂತೆಯೇ, ಈ ದೇವಾಲಯದಲ್ಲಿ ಚಚ್ಚೌಕವಾಗಿರುವ ನವರಂಗದ ಮಧ್ಯೆ ವೇದಿಕೆಯನ್ನು ರಚಿಸಿದ್ದು (ಈಗ ಬಹುಪಾಲು ಮುಚ್ಚಿಹೋಗಿದೆ), ಅದರ ಮೇಲೆ ನಾಲ್ಕು ಕಂಬಗಳೂ ಅವುಗಳ ಸುತ್ತ ಭಿತ್ತಿಗೆ ಸೇರಿದ ಹನ್ನೆರಡು ಕಂಬಗಳೂ ಇವೆ. ಕಂಬಗಳು ಪೀಠರಹಿತವಾಗಿಯೂ ಸರಳವಾಗಿಯೂ ರಚನೆಗೊಂಡಿವೆ. ಕಂಬದ ಮಧ್ಯಭಾಗದಲ್ಲಿ ಹದಿನಾರುಮುಖದ ವಿನ್ಯಾಸವಿದ್ದು, ಅದರ ಮೇಲೆ ಚೌರಸ ಫಲಕವಿದೆ. ಇದರ ಮೇಲೆ ಕಂಬದ ಉಳಿದ ಭಾಗಗಳಾದ ಕಲಶ, ತಡಿ, ಕುಂಭಗಳಿವೆ. ಹೆಚ್ಚು ಉಬ್ಬಿದಂತಿರದ 'ಕುಂಭ'ದ ಮೇಲೆ ಬೋದಿಗೆಯನ್ನು ರಚಿಸಲಾಗಿದೆ. ('ಫಲಕ' ಇಲ್ಲ). ಕಂಬದ ನಾಲ್ಕೂ ಮುಖದಲ್ಲಿರುವ ಈ ಬೋದಿಗೆಯು 'ತರಂಗಬೋದಿಗೆ'ಯಾಗಿದೆ ಹಾಗೂ ಅದರಲ್ಲಿ 'ಮಧ್ಯಪಟ್ಟ'ವೂ ಇದೆ. ವೇದಿಕೆಯ ನಾಲ್ಕೂ ಕಂಬಗಳ ಮಧ್ಯೆ ಒಂದು ಅಂಕಣವೂ ಸುತ್ತ ಇದೇ ರೀತಿ ಎಂಟು ಅಂಕಣಗಳೂ ಇವೆ. 'ನವರಂಗ' ಎಂಬ ಹೆಸರಿಗೆ ತಕ್ಕಂತೆ ಒಟ್ಟು ಒಂಭತ್ತು ಅಂಕಣಗಳಿರುವ ಸಮತಲ ವಿತಾನದಲ್ಲಿ ಎಲ್ಲ ಅಂಕಣಗಳನ್ನೂ 'ಪದ್ಮಶಿಲಾ' ರೀತಿಯಲ್ಲಿ ರಚಿಸಲಾಗಿದೆ. ಮಧ್ಯೆ ಅಧೋಮುಖಿಯಾದ ಕಮಲವನ್ನು ಬಿಡಿಸಿದ್ದಾರೆ. ನವರಂಗದಲ್ಲಿ ಗಣಪತಿ, ಸರಸ್ವತಿ, ಇತ್ಯಾದಿ ಬಿಂಬಗಳಿವೆ. ಇದರ

5 ಗ್ರೀವಭಾಗದಲ್ಲಿ ನಂದಿಯನ್ನು ಇಡಬೇಕೆಂಬುದು ನಿಯಮ — ಮಯಮತ, ೧೯.೪೭-೪೮

6 ಈ ರೀತಿಯ ಶಿಖರವನ್ನು 'ಫಾಂಸನಾ ದ್ರಾವಿಡಶಿಖರ'ವೆಂದು ಡಾ॥ ಕೆ. ವಿ. ಸೌಂದರರಾಜನ್‌ರವರು ಗುರುತಿಸುತ್ತಾರೆ- ನೋಡಿ : *Encyclopedia of Indian Temple Architecture*, Vol. I, Part 2, p. 57

7 ಮಯಮತ, ೨೫.೩೦-೩೧

ದ್ವಾರವು ಗರ್ಭಗೃಹದ ದ್ವಾರದಂತೆಯೇ ಇದೆ. ಹೀಗೆ ನವರಂಗವು ಚಿಕ್ಕದಾದರೂ ಪೂರ್ಣ ಅಲಂಕರಣವನ್ನು ಹೊಂದಿದೆ.

ಈ ದೇವಾಲಯದ ನಿರ್ಮಾಣದ ಕಾಲವನ್ನು ಹೇಳುವ ಯಾವ ಶಾಸನವೂ ದೊರೆತಿಲ್ಲ. ತುರುವೇಕೆರೆ ಮತ್ತು ಅದರ ಸುತ್ತಲಿನ ಪ್ರದೇಶಗಳು ೧೧-೧೨ನೇ ಶತಮಾನದಲ್ಲಿ ಪ್ರಸಿದ್ಧಿಗೆ ಬರುತ್ತವೆ. ಸುಮಾರು ಇದೇ ಕಾಲದಲ್ಲಿಯೇ ಈ ಊರು ಸಹಾ ಅಸ್ತಿತ್ವಕ್ಕೆ/ಪ್ರಸಿದ್ಧಿಗೆ ಬಂದಂತೆ ತೋರುತ್ತದೆ. ಅಲ್ಲದೆ, ಈ ದೇವಾಲಯದ ಅಧಿಷ್ಠಾನ, ಶಿಖರ, ಕಂಬ—ಇವು ಸಹಾ ಇದೇ ಕಾಲದ ಇತರ ದೇವಾಲಯಗಳನ್ನು ಹೋಲುತ್ತವೆ. ಈ ಹಿನ್ನೆಲೆಯಲ್ಲಿ ಈ ದೇವಾಲಯವನ್ನು ಕ್ರಿ.ಶ. ೧೧-೧೨ನೇ ಶತಮಾನಕ್ಕೆ ಸೇರಿದ ದೇವಾಲಯವೆಂದು ಊಹಿಸಬಹುದಾಗಿದೆ.

ವಾಸ್ತುಶೈಲಿಯ ವಿಶೇಷತೆ : ಅಧಿಷ್ಠಾನ, ಭಿತ್ತಿ, ಪ್ರಸ್ತರ, ಗ್ರೀವ, ಶಿಖರ, ಕಲಶ—ಹೀಗೆ ಆರೂ ಅಂಗಗಳಿದ್ದು, ಈ ದೇವಾಲಯವು ದ್ರಾವಿಡಶೈಲಿಯ ಷಡ್ವರ್ಗ ದೇವಾಲಯಗಳಿಗೆ ಒಂದು ಉದಾಹರಣೆಯಾಗಿದೆ. 'ಮಂಚಬಂಧ' ಅಧಿಷ್ಠಾನದ ಆರಂಭವನ್ನು ಮಹಾಕೂಟದ ಹಿರೇಮಹಾಕೂಟೇಶ್ವರ ದೇವಾಲಯದಲ್ಲೇ ಕಾಣಬಹುದಾಗಿದೆ. (ಕಾಲ : ಕ್ರಿ. ಶ. ಸುಮಾರು ೫೯೦-೬೦೦). ಕ್ರಿ.ಶ. ೭-೮ನೇ ಶತಮಾನದ ಐಹೊಳೆ—ಬಾದಾಮಿ—ಪಟ್ಟದಕಲ್ಲಿನ ಕೆಲವು ದೇವಾಲಯಗಳು ಮತ್ತು ಕೆಲವು ದೇವಾಲಯಗಳ 'ಪ್ರತೋಲಿ'ಗಳಲ್ಲೂ ಮಂಚಬಂಧ ಅಧಿಷ್ಠಾನವಿದೆ. ಆ ನಂತರದ ದೇವಾಲಯಗಳಲ್ಲಿ ಅದು ಹೆಚ್ಚಾಗಿ 'ಪ್ರತೋಲಿ'ಗಳಲ್ಲೇ ಉಳಿದುಕೊಂಡು ಬಂದಿರುವುದನ್ನು ಕಾಣುತ್ತೇವೆ. ಹೀಗಿರುವಾಗ, ಬಾದಾಮಿ ಚಾಲುಕ್ಯರ ನಂತರ ಪ್ರಧಾನ ದೇವಾಲಯದಲ್ಲಿ ಅಪರೂಪವಾಗಿ ಕಾಣಬರುವ ಮಂಚಬಂಧ ಅಧಿಷ್ಠಾನವಿರುವ ಕೆಲವೇ ದೇವಾಲಯಗಳಲ್ಲಿ ಇದೂ ಒಂದಾಗಿದೆ. ಕದಂಬನಾಗರ ಶಿಖರವು ಕ್ರಿ.ಶ. ೭—೮ನೇ ಶತಮಾನದಿಂದಲೂ ಬಳಕೆಯಲ್ಲಿದ್ದು, ಕ್ರಿ. ಶ. ೧೦-೧೧ ನೇ ಶತಮಾನದ ದೇವಾಲಯಗಳಲ್ಲೂ ಇದನ್ನು ಕಾಣುತ್ತೇವೆ. ಹೀಗೆ ಅಲ್ಲಲ್ಲಿ ಕಾಣಬರುವ ಕದಂಬ ನಾಗರ ಶಿಖರಕ್ಕೆ ಇದು ಮತ್ತೊಂದು ಕೊಡುಗೆಯಾಗಿದೆ.

ಈ ದೇವಾಲಯದ ನವರಂಗದಲ್ಲಿರುವ ಕಂಬವು ಕ್ರಿ.ಶ. ೧೦-೧೧ನೇ ಶತಮಾನದ ಅನೇಕ ದೇವಾಲಯಗಳಲ್ಲಿ ಕಾಣಬರುತ್ತದೆ. ಈ ರೀತಿಯ ಕಂಬಗಳಿಗೆ ಚೌರಸಫಲಕದ ಅಂತ್ಯಗಳಲ್ಲಿ ಕಮಲದ ಮೊಗ್ಗುಗಳನ್ನು ಬಿಡಿಸಿದಾಗ ಅವು 'ಚಿತ್ರಸ್ಕಂಭ' ಪ್ರಕಾರದ ಸ್ತಂಭವೆನಿಸುತ್ತವೆ. ಮುಂದೆ, ಕ್ರಿ.ಶ. ೧೪—೧೫ನೇ ಶತಮಾನಗಳಲ್ಲಿ ಕಾಣಬರುವ 'ಚಿತ್ರಸ್ಕಂಭ'ವೆಂಬ ಸ್ತಂಭ ಪ್ರಕಾರಕ್ಕೆ ಈ ರೀತಿಯ ಸ್ತಂಭಗಳೇ ಪ್ರೇರಕವಾಗಿವೆಯೆನ್ನಬಹುದು.

ದೇವಾಲಯವು ರಚನಾ ವಿನ್ಯಾಸದಲ್ಲಿ ಸುತ್ತಲಿನ ದೇವಾಲಯಗಳನ್ನು ಹೋಲುತ್ತಿದ್ದು ಕಾಲ, ರಾಜವಂಶಗಳಿಗಿಂತ ಹೆಚ್ಚಾಗಿ ಪ್ರಾದೇಶಿಕತೆಯನ್ನು ಎತ್ತಿ ಹಿಡಿಯುತ್ತಿದೆ.

ಈ ದೇವಾಲಯದಲ್ಲಿ ವೀರಶೈವರು ನಿತ್ಯವೂ ಪೂಜೆಯನ್ನು ಮಾಡುತ್ತಾರಾದರೂ ಮಹಾಶಿವರಾತ್ರಿಯಲ್ಲಿ ವಿಶೇಷವಾಗಿ ಅಭಿಷೇಕ ಇತ್ಯಾದಿಗಳು ನಡೆಯುತ್ತವೆ. ಊರಿನಲ್ಲಿ ಕಾಲಕ್ಕೆ ಸರಿಯಾಗಿ ಮಳೆ ಬಾರದೇ ಇದ್ದಲ್ಲಿ, ಸಾಂಪ್ರದಾಯಿಕವಾಗಿ ರುದ್ರಾಭಿಷೇಕವನ್ನು ನೆರವೇರಿಸುತ್ತಾರೆ. ಅಂದು, ದೇವರಿಗೆ ಗುಟುಕು ನೀರು ಕುಡಿಸಿ ಕೋಡಿ ಹರಿಸಿದರೆ ದೇವರು ಆಶೀರ್ವದಿಸಿ ಮಳೆ ತರಿಸುತ್ತಾನೆಂಬ ನಂಬಿಕೆ ಇಲ್ಲಿನ ಜನರಲ್ಲಿದೆ.

ಹೀಗೆ,ಚಿಕ್ಕದಾಗಿ ಸರಳವಾಗಿ ರಚಿಸಲ್ಪಟ್ಟಿದ್ದರೂ ಈ ದೇವಾಲಯವು ಈ ತಾಲ್ಲೂಕಿನ ದೇವಾಲಯಗಳಲ್ಲಿ ವಾಸ್ತುಶಿಲ್ಪ ದೃಷ್ಟಿಯಿಂದ ತನ್ನದೇ ಆದ ಸ್ಥಾನವನ್ನು ಹೊಂದಿದೆ. ಆದರೆ ತುರುವೇಕೆರೆ, ನಾಗಲಾಪುರ, ಈ ಪ್ರದೇಶದ ದೇವಾಲಯಗಳ ಬಗೆಗೆ ಉಲ್ಲೇಖ ದೊರೆಯುವಂತೆ ಈ ದೇವಾಲಯದ ಬಗೆಗೆ ದೊರೆಯುವುದಿಲ್ಲ. ಸಮಗ್ರವಾಗಿ ಗಮನಿಸಿದರೆ, ಈ ಊರಿನ ಎಲ್ಲ ದೇವಾಲಯಗಳೂ ಒಂದು ರೀತಿಯಲ್ಲಿ ಆಸಕ್ತಿದಾಯಕವಾಗಿವೆ ಎಂದು ಹೇಳಬಹುದಾಗಿದೆ.

ಈ ಊರಿನ ಬಗೆಗಾದರೂ ಹೆಚ್ಚಿನ ವಿಷಯಗಳು ನಮಗೆ ಸದ್ಯಕ್ಕೆ ಸಿಗುತ್ತಿಲ್ಲ. ಈ ಊರಿನ ಇತಿಹಾಸವನ್ನು ಸು. ೮೦೦–೯೦೦ ವರ್ಷಗಳಷ್ಟು ಹಿಂದಕ್ಕೆ ಒಯ್ಯಬಹು ದಾದರೂ ಅದಕ್ಕೆ ದಾಖಲೆಗಳ ನೆರವು ಬೇಕು. ಅದಕ್ಕೂ ಹಿಂದಿನ ಇತಿಹಾಸವನ್ನೂ ಗುರುತಿಸುವ ಪ್ರಯತ್ನ ಮಾಡ ಬೇಕಿದೆ. ಮಹಾಸತಿ, ಅರಸಮ್ಮದೇವಿ-ಈ ಕಥೆಗಳಿಗೂ ದತ್ತಿ ಪಡೆದ ವಿಷಯಗಳಿಗೂ ಆಧಾರಗಳನ್ನು ಹುಡುಕ ಬೇಕಾಗಿದೆ. ಅಲ್ಲದೆ, ಈ ಊರಿನ ಸಾಮಾಜಿಕ, ಸಾಂಸ್ಕೃತಿಕ ಅಂಶಗಳ ಬಗ್ಗೆ ಇನ್ನೂ ಹೆಚ್ಚಿನ ವಿಷಯ ಗಳನ್ನು ಸಂಗ್ರಹಿಸಬೇಕಾಗಿದೆ.*

---

* ಇಲ್ಲಿಯ ದೇವಾಲಯ ಮತ್ತು ಶಾಸನಗಳನ್ನು ಕುರಿತು ವಿಷಯವನ್ನು ಸಂಗ್ರಹಿಸುವಲ್ಲಿ ನನಗೆ ಸಹಾಯ ಮಾಡಿದ ನನ್ನ ತಾತನವ ರಾದ ಶ್ರೀ ಟಿ. ಎಸ್. ಕೆರಗೋಡಯ್ಯ (ನಿವೃತ್ತ ಶಾನುಭೋಗರು) ಅವರಿಗೂ ಸೋದರಮಾವ ಶ್ರೀ ಟಿ. ಕೆ. ಶಿವಸ್ವಾಮಿ ಅವರಿಗೂ ಅಧ್ಯಾಪಕರಾದ ಶ್ರೀ ಶಿವರಾಮರಾಜು ಅವರಿಗೂ ಊರಿನ ಹಿರಿಯರಿಗೂ ನಾನು ಕೃತಜ್ಞಳಾಗಿದ್ದೇನೆ.